# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 33ನೇ ಸಂಚಿಕೆ ಕೊಪ್ಪ 13-3-1988 ಭಾನುವಾರ ಬೆಲೆ 50 ಪೈಸೆ




## ವಿರೋಧ ಪಕ್ಷಗಳ 'ಭಾರತ ಬಂದ್' :
# ಕೊಪ್ಪದಲ್ಲಿ ಸಿಪಿಐ-ಜನತಾ ಜಂಟಿ ಕಾರ್ಯಕ್ರಮ

**ಕೊಪ್ಪ : 'ಭ್ರಷ್ಟಾಚಾರಿ, ಜನ ವಿರೋಧಿ' ಕೇಂದ್ರ ಸರ್ಕಾರದ ರಾಜೀನಾಮೆಗಾಗಿ ಒತ್ತಾಯಿಸಲು ವಿರೋಧ ಪಕ್ಷಗಳು ಕರೆ ಕೊಟ್ಟಿರುವ ಮಾ. 15ರ 'ಭಾರತ ಬಂದ್' ಅನ್ನು ಕೊಪ್ಪದಲ್ಲಿ ಸಿಪಿಐ ಮತ್ತು ಜನತಾ ಪಕ್ಷಗಳು ಜಂಟಿಯಾಗಿ ಅನುಸರಿಸಲಿವೆ.**

ಕೊಪ್ಪ ತಾಲ್ಲೂಕಿನ ಸಿಪಿಐ ಕಾರ್ಯದರ್ಶಿ ಎ. ಆರ್. ರಾಮಚಂದ್ರ ಮತ್ತು ಜನತಾ ಕಾರ್ಯದರ್ಶಿ ಎಚ್. ಎಸ್. ಕಳಸಪ್ಪ ಈ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಂಡಿದ್ದಾರೆಂದು ಸಿಪಿಐ ಮೂಲಗಳು ತಿಳಿಸಿವೆ.

### ಕಾರ್ಮಿಕರ ಬೆಂಬಲ

ಮಾ. 6ರಂದು ಕಾರ್ಮಿಕ ಮುಖಂಡ ಅನಂತ ಸುಬ್ಬರಾವ್ ಅಧ್ಯಕ್ಷತೆಯಲ್ಲಿ ನಡೆದ ಶಂಕರ್ ಕಾರ್ಮಿಕರ ಸರ್ವ ಸದಸ್ಯರ ಸಭೆ ಭಾರತ ಬಂದ್‌ಗೆ ತನ್ನ ಸಂಪೂರ್ಣ ಬೆಂಬಲ ವ್ಯಕ್ತಪಡಿಸಿತು. ನ.ರಾ. ಪುರ ಸಿಪಿಐ ಘಟಕವೂ ಬಂದ್‌ಗೆ ಪೂರ್ಣ ಬೆಂಬಲ ಘೋಷಿಸಿದೆ.

### ಎ.ಐ.ಎಸ್.ಎಫ್. ಬೆಂಬಲ

ಭ್ರಷ್ಟ ಕೇಂದ್ರ ಸರ್ಕಾರದ ರಾಜೀನಾಮೆ ಮತ್ತು ಮಧ್ಯಂತರ ಚುನಾವಣೆಗಳಿಗೆ ಒತ್ತಾಯಿಸಿ, ಹಾಗೂ ಬೆಲೆ ಏರಿಕೆ ವಿರೋಧಿಸಿ, ಎಡ ಮತ್ತು ಪ್ರಜಾಸತ್ತಾತ್ಮಕ ಶಕ್ತಿಗಳು ಮಾ. 15 ರಂದು ನಡೆಸಲಿರುವ 'ಭಾರತ ಬಂದ್'ಗೆ ಪೂರ್ಣ ಬೆಂಬಲ ವ್ಯಕ್ತಪಡಿಸಿರುವ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ (ಎ. ಐ. ಎಸ್. ಎಫ್.) ಜಿಲ್ಲಾ ಘಟಕವು ಅಂದು ಜಿಲ್ಲೆಯ ಎಲ್ಲಾ ವಿದ್ಯಾರ್ಥಿಗಳು ಈ ಚಳುವಳಿಯಲ್ಲಿ ಭಾಗವಹಿಸಬೇಕೆಂದು ಕರೆ ಕೊಟ್ಟಿದೆ.

### ಎಂ. ಎಸ್. ಕೃಷ್ಣನ್ ಮೇಲಿನ ಹಲ್ಲೆಗೆ ಖಂಡನೆ

ಈ ಬಂದ್‌ಗೆ ಸಾರ್ವಜನಿಕರು ಪೂರ್ಣ ಸಹಕಾರ ನೀಡುವಂತೆ ಮನವಿ ಮಾಡಿರುವ ಕೊಪ್ಪ ತಾ|| ಸಿಪಿಐ ಘಟಕವು, ಬೆಂಗಳೂರಿನಲ್ಲಿ ಕೊಳೆಗೇರಿಯೊಂದರ ನಿವಾಸಿಗಳ ಮನೆಗಳನ್ನು ನೆಲಸಮ ಮಾಡಿರುವುದನ್ನು ಪರಿಶೀಲಿಸಲು ತೆರಳಿದ್ದ ಪಕ್ಷದ ರಾಜ್ಯ ಕಾರ್ಯದರ್ಶಿ ಎಂ. ಎಸ್. ಕೃಷ್ಣನ್ ಮೇಲೆ ಕಾಂಗ್ರೆಸ್ ಗೂಂಡಾಗಳು ನಡೆಸಿದ ಹಲ್ಲೆಯನ್ನು ತೀವ್ರವಾಗಿ ಖಂಡಿಸಿದೆ.

## ಶಂಕರ್ ಕಾರ್ಮಿಕ ಸಂಘಕ್ಕೆ ನೂತನ ಪದಾಧಿಕಾರಿಗಳ ಆಯ್ಕೆ;
# ಕಾರ್ಮಿಕರ ಅಕಾರಣ ವಜಾಕ್ಕೆ ಖಂಡನೆ

ಕೊಪ್ಪ : ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯ ಆಡಳಿತ ವರ್ಗವು ಕಾರ್ಮಿಕ ಸಂಘಟನೆಯ ಪ್ರಮುಖರಾದ ಸುಮಾರು 10 ಜನ ಕಾರ್ಮಿಕರನ್ನು ವಿನಾಕಾರಣ ವಜಾ ಮಾಡಿರುವುದಲ್ಲದೆ 12 ಜನರ ಮೇಲೆ ಕ್ಷುಲ್ಲಕ ಆರೋಪ ಹೊರಿಸಿ ಅಮಾನತಿನಲ್ಲಿಟ್ಟಿರುವುದನ್ನು ಕಾರ್ಮಿಕ ಸಂಘದ ಸರ್ವಸದಸ್ಯರ ಸಭೆ ತೀವ್ರವಾಗಿ ಖಂಡಿಸಿದೆ.

ಇದೇ ರೀತಿ ಒಂದಿಲ್ಲೊಂದು ರೀತಿಯ ಕಿರುಕುಳವನ್ನು ಸುಮಾರು 40 ಜನ ಉತ್ತಮ ಕೆಲಸಗಾರರಾದ ಕಾರ್ಮಿಕರಿಗೆ ಸಂಸ್ಥೆಯು ನೀಡುತ್ತಿರುವುದನ್ನು ಈಗಲಾದರೂ ನಿಲ್ಲಿಸಿ ಕಾರ್ಮಿಕರ ವಾಸ್ತವಿಕ ಸಮಸ್ಯೆಗಳನ್ನು ಬಗೆಹರಿಸದಿದ್ದಲ್ಲಿ ಹಂತಹಂತವಾಗಿ ಪುನಃ ಚಳುವಳಿಯನ್ನು ನಡೆಸಲಾಗುವುದೆಂದು ಎಚ್ಚರಿಸಿ, ಸಂಘವು ಆಡಳಿತ ವರ್ಗಕ್ಕೆ ನೋಟೀಸು ಜಾರಿ ಮಾಡಿದೆ

### ಚಿಕ್ಕೇಗೌಡ ಪ್ರಧಾನ ಕಾರ್ಯದರ್ಶಿ

ಕಳೆದ ವರ್ಷದಿಂದ ಕಾರ್ಮಿಕರ ಹೋರಾಟದ ಮುಂಚೂಣಿಯಲ್ಲಿದ್ದವರೂ, ಮಾಲೀಕ ವರ್ಗದ ಗೂಂಡಾಗಳಿಂದ ಹಲ್ಲೆಗೀಡಾಗಿದ್ದವರೂ, ವರ್ಕ್ಸ್ ಮ್ಯಾನೇಜರ್‌ಗೆ ಹೊಡೆಯ ಹೋದರೆಂಬ ದೂರನ್ನು ಹೊರಿಸಿ ಕೆಲಸದಿಂದ ವಜಾ ಮಾಡಲ್ಪಟ್ಟವರೂ ಆದ ಚಿಕ್ಕೇಗೌಡ ಸಂಘಕ್ಕೆ ನೂತನ ಪ್ರಧಾನ ಕಾರ್ಯದರ್ಶಿಯಾಗಿ ಮಾ. 6ರ ಸರ್ವ ಸದಸ್ಯರ ಸಭೆಯಲ್ಲಿ ಆಯ್ಕೆಯಾಗಿದ್ದಾರೆ.

ಎ.ಐ.ಟಿ.ಯು.ಸಿ. ಪ್ರಧಾನ ಕಾರ್ಯದರ್ಶಿ ಎಚ್. ಎಂ. ರೇಣುಕಾರಾಧ್ಯ ಸಂಘದ ಅಧ್ಯಕ್ಷರಾಗಿದ್ದು, ಉಳಿದ ಪದಾಧಿಕಾರಿಗಳು ಇಂತಿದ್ದಾರೆ: ಬಿ. ಟಿ. ಚಂದ್ರಶೇಖರ್ (ಉಪಾಧ್ಯಕ್ಷ), ಎಚ್. ಆರ್. ಸಂಜೀವ (ಕಾರ್ಯದರ್ಶಿ), ಸಿ. ಎಸ್. ಚವಾಣ್ (ಸಹ ಕಾರ್ಯದರ್ಶಿ), ಎ. ಎನ್. ದಿವಾಕರ್ (ಖಜಾಂಚಿ) ಹಾಗೂ ಆರ್. ಬಿ. ಬಸವ, ವಿ. ರಮೇಶ್, ಆಗಸ್ಟಿನ್, ಸಿ. ಎ. ಎಸ್. ಮೂರ್ತಿ, ಎ. ಅಣ್ಣಪ್ಪ, ಮಲ್ಲಿಕಾರ್ಜುನಪ್ಪ, ಕಟ್ಟೇಗೌಡ, ತಮ್ಮಣ್ಣಗೌಡ ಹಾಗೂ ಎಂ. ಜಯರಾಂ (ಕಾರ್ಯಕಾರಿ ಸಮಿತಿ ಸದಸ್ಯರು.)

### ಟೆಲಿಫೋನ್ ಸಿಬ್ಬಂದಿ ಮುಷ್ಕರ ಹಿಂದಕ್ಕೆ

ಕೊಪ್ಪ: ಮಾ. 5-6ರ ಮಧ್ಯ ರಾತ್ರಿಯಿಂದ 'ಟೂಲ್ ಡೌನ್' ಮುಷ್ಕರ ಆರಂಭಿಸಿದ್ದ ದೇಶಾದ್ಯಂತದ ಟೆಲಿಫೋನ್ ಇಲಾಖೆಗಳ ನೌಕರರು, ತಮ್ಮ ಪ್ರಮುಖವಾದ ಎಲ್ಲಾ 6 ಬೇಡಿಕೆಗಳನ್ನೂ ಜಂಟಿ ಸಮಾಲೋಚನಾ ಸಮಿತಿಯಲ್ಲಿ ಚರ್ಚಿಸಿ ಒಪ್ಪಂದಕ್ಕೆ ಬರಲು ಕೇಂದ್ರ ಸರ್ಕಾರ ಸಮ್ಮತಿಸಿದ ಕಾರಣ 48 ಗಂಟೆಗಳಲ್ಲೇ ಮುಷ್ಕರವನ್ನು ಹಿಂತೆಗೆದುಕೊಂಡಿದ್ದಾರೆ.

### ಕೃಷಿ ಸಲಹೆ

ಶೃಂಗೇರಿ : ಈ ತಾಲ್ಲೂಕಿನಲ್ಲಿ ಬೇಸಿಗೆ ಭತ್ತದ ಬೆಳೆ ಮಾಡಿರುವ ಕಡೆ ಕಾಂಡ ಕೊರೆಯುವ ಹುಳು (ಗಂಟು ಹುಳು) ಬಾಧೆ ಕಂಡು ಬಂದಿದೆ. ಇದರ ಲಕ್ಷಣವೆಂದರೆ ಭತ್ತದ ಪೈರಿನ ಸುಳಿ ಒಣಗುತ್ತಿರುತ್ತದೆ, ಇಂತಹ ಸುಳಿಯನ್ನು ಕೈಯಿಂದ ಎಳೆದರೆ ಸುಲಭವಾಗಿ ಕೈಗೆ ಬರುತ್ತದೆ.

ಇಂತಹ ಲಕ್ಷಣಗಳು ಕಂಡು ಬಂದಿರುವ ಕಡೆ ರೈತರು 18 ಮಿ. ಲೀ. ಮೆಟಾಸಿಡ್ ಅಥವಾ 36 ಮಿ. ಲೀ. ಎಕಾಲಕ್ಸ್‌ನ್ನು 18 ಲೀ. ನೀರಿಗೆ ಬೆರೆಸಿ ಸಿಂಪರಣೆ ಮಾಡಿ ಹತೋಟಿ ಮಾಡಬೇಕು. ಹೆಚ್ಚಿನ ಮಾಹಿತಿಗೆ ಕೃಷಿ ಇಲಾಖೆಯ ಸಿಬ್ಬಂದಿಯನ್ನು ಭೇಟಿ ಮಾಡಬೇಕೆಂದು ಸಹಾಯಕ ಕೃಷಿ ನಿರ್ದೇಶಕರು ತಿಳಿಸಿದ್ದಾರೆ.

## ನರಸಿಂಹರಾಜಪುರ ತಾಲ್ಲೂಕು
# ದಲಿತ ಸಂಘರ್ಷ ಸಮಿತಿ ಶಾಖೆ ಆರಂಭ

**ನ. ರಾ. ಪುರ : ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಈ ತಾಲ್ಲೂಕು ಶಾಖೆಯನ್ನು ಆರಂಭಿಸಲು ಮಾ. 10ರಂದು ನಡೆದ ಸ್ಥಳೀಯ ಮತ್ತು ಸುತ್ತಮುತ್ತಲ ಗ್ರಾಮಗಳ ದಲಿತರ ಸಭೆಯಲ್ಲಿ ನಿರ್ಣಯಿಸಲಾಯಿತು. ಶಾಖೆಯ ಉದ್ಘಾಟನಾ ಸಮಾರಂಭ ಏಪ್ರಿಲ್ 2ರಂದು ನಡೆಯಲಿದೆ.**

ದಲಿತರ ಸಂಘಟನೆಯ ಅನಿವಾರ್ಯತೆ ಮತ್ತು ಉದ್ದೇಶಗಳನ್ನು ಕುರಿತು ಜಿಲ್ಲಾ ಶಾಖೆಯ ಸಂಚಾಲಕ ಆರ್. ಕಲ್ಲಯ್ಯ, ಜಿಲ್ಲಾ ಸಮಿತಿ ಸದಸ್ಯ ಕೆ. ಭದ್ರಯ್ಯ, ಕಾರ್ಯಕರ್ತ ಸಣ್ಣ ತಿಮ್ಮಯ್ಯ, ಪತ್ರಕರ್ತರಾದ ಸಿರಿಮನೆ ನಾಗರಾಜ್ ಮತ್ತು ಎ. ಎಂ. ಅನಂತ ಮೂರ್ತಿ ಸಭೆಯಲ್ಲಿ ಮಾತನಾಡಿದರು.

ತಾ|| ಶಾಖೆಯ ತಾತ್ಕಾಲಿಕ ಸಮಿತಿಗೆ ಎಚ್. ಎಂ. ಶಿವಣ್ಣ ಸಂಚಾಲಕರಾಗಿ, ಭಾಗುವಳ್ಳಿ ಪುಟ್ಟಸ್ವಾಮಿ ಸಂಘಟನಾ ಸಂಚಾಲಕರಾಗಿ ಹಾಗೂ ಎ. ಎಂ. ಗಣೇಶ್ ಖಜಾಂಚಿಯಾಗಿ, ಇತರ ಆರು ಜನ ಸದಸ್ಯರಾಗಿ ಆಯ್ಕೆಯಾದರು.

ದಲಿತ ಕಾರ್ಯಕರ್ತರು ಹೋರಾಟದ ಹಾಡುಗಳು ಮತ್ತು ನೃತ್ಯಗಳ ಕಾರ್ಯಕ್ರಮ ನಡೆಸಿಕೊಟ್ಟರು.

ನ. ರಾ. ಪುರ ಪುರಸಭಾ ಸದಸ್ಯ ಮುಳ್ಳಯ್ಯ ಅವರೂ ಸಭೆಯಲ್ಲಿ ಭಾಗವಹಿಸಿದ್ದರು.

### ಅಡಿಕೆ ಧಾರಣೆ

**ಶಿವಮೊಗ್ಗ 12-3-1988**

ಸರಕು 3600 - 4413
ಬೆಟ್ಟೆ 2400 - 3050
ಗೊರಬಲು : 800 - 1200

**ಸಾಗರ 12-3-1988**

ಚಿಕಣಿ . 3800 - 4689
ಚಾಲಿ : 1200 - 1755
ಸಿಪ್ಪೆಗೋಟು : 500 - 850
ಇಡಿ : 1900 - 2200

### ಏಲಕ್ಕಿ ಧಾರಣೆ

**ಸಕಲೇಶಪುರ 10.3.1988**

ಸರಾಸರಿ : 145 - 152

**ಮಂಗಳೂರು 11.3.1988**

ಏಲಕ್ಕಿ : 120 - 140
ಕಾಳು ಮೆಣಸು : 3818

# ಗಾಯಗಳಿಂದಾಗುವ ಬಹಿರಂಗ ರಕ್ತಸ್ರಾವಕ್ಕೆ ಚಿಕಿತ್ಸೆ

ಕೆಲವು ತಿಂಗಳುಗಳ ಹಿಂದೆ ಇಂಗ್ಲೆಂಡಿನಲ್ಲಿ ನಡೆದ ಘಟನೆ. ಕ್ರಿಕೆಟ್ ಪಂದ್ಯವೊಂದರಲ್ಲಿ ಪ್ರೇಕ್ಷಕರ ಗಲಭೆಯಲ್ಲಿ ಒಬ್ಬ ಯುವಕನಿಗೆ ಒಡೆದ ಗಾಜಿನಿಂದ ಕತ್ತಿನ ಭಾಗದಲ್ಲಿ ತೀವ್ರವಾಗಿ ಗಾಯವಾದಾಗ ಹತ್ತಿರದಲ್ಲಿದ್ದವರ ಸಮಯ ಪ್ರಜ್ಞೆಯಿಂದ ಅವನ ಜೀವವು ಉಳಿದುಕೊಂಡಿತು. ಅಲ್ಲಿ ಕೈಗೊಳ್ಳಲಾದ ಚಿಕಿತ್ಸಾ ಕ್ರಮವೆಂದರೆ ಆಸ್ಪತ್ರೆಯನ್ನು ತಲುಪುವವರೆಗೂ ರಕ್ತಸ್ರಾವವಾಗದಂತೆ ಗಾಯದ ಭಾಗವನ್ನು ಒತ್ತಿ ಹಿಡಿದುದು. ಕತ್ತಿನ ಭಾಗದಲ್ಲಿ ರಕ್ತನಾಳ ತುಂಡಾಗಿದ್ದರೂ ಈ ಕ್ರಮದಿಂದ ವ್ಯಕ್ತಿಯು ಬದುಕುಳಿಯುವಂತಾಯಿತು.

ಅಪಘಾತಗಳಿಂದ, ಹಲ್ಲೆಗಳಿಂದ ಗಾಯಗಳಾಗಿ ರಕ್ತಸ್ರಾವವಾಗುವುದು ಪ್ರತಿನಿತ್ಯವೂ ವಿಶ್ವದ ಎಲ್ಲೆಡೆ ಸಂಭವಿಸುವ ಸಂಗತಿ. ಆದರೆ ಕಾರಣ ಏನೇ ಇರಲಿ, ಬಹಿರಂಗವಾದ ರಕ್ತಸ್ರಾವವನ್ನು ಕಂಡೊಡನೆ ಜನಸಾಮಾನ್ಯರು ಗಾಬರಿಯಾಗುವುದು ಸಹಜ. ರಕ್ತಸ್ರಾವವಾದಲ್ಲಿ ನಿಶ್ಶಕ್ತಿಯಾದೀತೆಂದು ಜನರು ಅದನ್ನು ನಿಲ್ಲಿಸಲು ವಿವಿಧ ರೀತಿಯ ಪ್ರಯತ್ನಗಳನ್ನು ಕೈಗೊಳ್ಳುತ್ತಾರೆ. ಆದರೆ ಬಹಳ ಸಂದರ್ಭಗಳಲ್ಲಿ ಇಂತಹ ಪ್ರಯತ್ನಗಳಿಂದಾಗುವ ಪ್ರಯೋಜನಕ್ಕಿಂತ ಮಿಗಿಲಾಗಿ ತೊಂದರೆಯೇ ಹೆಚ್ಚು. ಏಕೆಂದರೆ ಬಹಳ ಜನರು ರಕ್ತಸ್ರಾವ ನಿಲ್ಲಿಸಲು ಮನೆಯಲ್ಲಿ ಸುಲಭವಾಗಿ ದೊರಕುವ ಎಲ್ಲಾ ರೀತಿಯ ಪುಡಿಗಳನ್ನೂ ಗಾಯಕ್ಕೆ ಹಾಕಲು ಉಪಯೋಗಿಸುತ್ತಾರೆ. ಇಂತಹ ವಿಧಾನಗಳಿಂದ ರಕ್ತಸ್ರಾವ ನಿಲ್ಲುವುದೂ ಇಲ್ಲ. ಬದಲಾಗಿ ಪುಡಿ ಇತ್ಯಾದಿ ವಸ್ತುಗಳನ್ನು ಗಾಯಕ್ಕೆ ಹಾಕುವುದರಿಂದ ಗಾಯ ಮಾಯಲು ಹೆಚ್ಚು ಕಾಲ ಹಿಡಿಯಬಹುದು. ಗಾಯ ಆಳವಾಗಿದ್ದು, ಹೊಲಿಗೆ ಹಾಕಬೇಕಾದಲ್ಲಿ, ಆ ಕಾರ್ಯಕ್ಕೆ ಅಡಚಣೆ ಕೂಡ ಉಂಟಾಗಬಹುದು. ಗಾಯಕ್ಕೆ ಅದರಿಂದ ಕೀವು ಆಗಲೂಬಹುದು.

ದಿನನಿತ್ಯದ ಆಕಸ್ಮಿಕಗಳಲ್ಲಿ ಕಂಡುಬರುವ ರಕ್ತಸ್ರಾವವನ್ನು ನಿಲ್ಲಿಸುವ ಸರಳ ಮಾರ್ಗವನ್ನು ಪ್ರತಿಯೊಬ್ಬ ಪ್ರಜೆಯೂ ಅರಿತಿರುವುದು ಅವಶ್ಯ. ಏಕೆಂದರೆ ಈ ಕ್ರಮವನ್ನು ಗಾಯವಾದ ತಕ್ಷಣ ಕೈಗೊಳ್ಳಬೇಕಾಗುತ್ತದೆ. ಬಹಿರಂಗವಾದ ರಕ್ತಸ್ರಾವವನ್ನು ನಿಲ್ಲಿಸಲು ಆಗತ್ಯವಾಗಿರುವುದು ಯಾವ ಪುಡಿಯೂ ಅಲ್ಲ, ಯಾವ ಔಷಧಿಯೂ ಅಲ್ಲ. ಅಂತಹ ಸಂದರ್ಭಗಳಲ್ಲಿ ರಕ್ತಸ್ರಾವವಾಗುತ್ತಿರುವ ಭಾಗದ ಮೇಲೆ ನೇರವಾಗಿ ಒತ್ತಡ ಹಾಕಿ ಈ ರಕ್ತಸ್ರಾವವನ್ನು ನಿಲ್ಲಿಸಬಹುದು. ಅಂದರೆ ಗಾಯದ ಭಾಗವನ್ನೇ ಭದ್ರವಾಗಿ ಅದುಮಿ ಐದರಿಂದ ಹತ್ತು ನಿಮಿಷಗಳ ಕಾಲ ಹಿಡಿಯುವುದರಿಂದ ರಕ್ತದ ಹಾನಿಯನ್ನು ನಿಲ್ಲಿಸಬಹುದು. ಗಾಯವನ್ನು ಒತ್ತಿ ಹಿಡಿಯಲು ಕೈಯನ್ನಾಗಲೀ, ಶುಭ್ರವಾದ ಬಟ್ಟೆಯನ್ನಾಗಲೀ ಉಪಯೋಗಿಸಬಹುದು. ಅಲ್ಪ ಪ್ರಮಾಣದಲ್ಲಿ ರಕ್ತಹಾನಿಯಾದಲ್ಲಿ ದೇಹಕ್ಕೆ ರಕ್ತದ ಕೊರತೆಯುಂಟಾಗಿ ದೇಹದ ಶಕ್ತಿ ಕುಂದಬಹುದೆಂದು ಭಯ ಪಡಬೇಕಿಲ್ಲ. ಪ್ರಕೃತಿಯು ಇಂತಹ ಕೊರತೆಯನ್ನು ತುಂಬಿಸಿಕೊಳ್ಳುವ ಶಕ್ತಿಯನ್ನು ಎಲ್ಲಾ ಜೀವಿಗಳಿಗೂ ಇತ್ತಿದೆ. ಸದಾಕಾಲ ದೇಹದ ಮೂಳೆಗಳ ಒಳಭಾಗದಲ್ಲಿ ರಕ್ತಕಣಗಳು ಉತ್ಪತ್ತಿಯಾಗುತ್ತಲೇ ಇರುವುದರಿಂದ ದೇಹದ ಶಕ್ತಿ ಕುಂದುವುದಿಲ್ಲ.

ತಲೆ, ಮುಖ ಮತ್ತು ಕತ್ತಿನ ಭಾಗದಲ್ಲಿ ಚಿಕ್ಕ ಗಾಯವಾದರೂ ರಕ್ತಸ್ರಾವದ ಪ್ರಮಾಣ ಜಾಸ್ತಿ ಇರುತ್ತದೆ. ರಕ್ತ ಜಾಸ್ತಿಯಾಗಿ ಸೋರಿಹೋಗುವುದನ್ನು ಕಂಡು ಗಾಯ ತೀವ್ರವಾಗಿರಬಹುದೆಂದು ಎಲ್ಲರೂ ಗಾಬರಿ ಪಡುತ್ತಾರೆ. ತಲೆಯ ಭಾಗದಲ್ಲಿ ರಕ್ತಸಂಚಾರ ಅಧಿಕವಾಗಿರುವುದು ಈ ರೀತಿಯ ಅಧಿಕ ರಕ್ತಸ್ರಾವಕ್ಕೆ ಕಾರಣ. ಆದರೆ ರಕ್ತ ನಿಲ್ಲಿಸಲು ಕೈಗೊಳ್ಳಬೇಕಾದ ಕ್ರಮ ಮಾತ್ರ ಒಂದೇ– ಗಾಯದ ಮೇಲೆ ಒತ್ತಡ. ಮೂಗಿನಿಂದ ರಕ್ತಸ್ರಾವವಾದರೂ ಅಷ್ಟೇ. ಎರಡೂ ಪಕ್ಕದಿಂದ (ಒಳಭಾಗದಿಂದ) ಐದು ನಿಮಿಷಗಳ ಕಾಲ ಮೂಗನ್ನು ಒತ್ತಿ ಹಿಡಿಯುವುದರಿಂದ ರಕ್ತಸ್ರಾವವನ್ನು ನಿಲ್ಲಿಸಬಹುದು.

ದಂತ ವೈದ್ಯರು ಹಲ್ಲು ಕಿತ್ತಾಗ ರಕ್ತಸ್ರಾವವನ್ನು ನಿಲ್ಲಿಸಲು ಹತ್ತಿ ಉಪಯೋಗಿಸುವ ಉದ್ದೇಶ ಕೂಡ ಗಾಯದ ಮೇಲೆ ಒತ್ತಡ ಬೀಳುವುದೇ ಆಗಿರುತ್ತದೆ. ಬಹಳ ಸಂದರ್ಭಗಳಲ್ಲಿ ವೈದ್ಯರು ಇದೇ ಕ್ರಮದಿಂದ ರಕ್ತವನ್ನು ನಿಲ್ಲಿಸುತ್ತಾರೆ.

ಸಣ್ಣ ಪ್ರಮಾಣದ ರಕ್ತಸ್ರಾವವು ಕೆಲವು ವೇಳೆ ಯಾವ ಚಿಕಿತ್ಸೆಯ ಅಗತ್ಯವೂ ಇಲ್ಲದೆ ಒಂದೆರಡು ನಿಮಿಷಗಳಲ್ಲಿ ನಿಂತು ಹೋಗುತ್ತದೆ. ಇದಕ್ಕೆ ಕಾರಣ ರಕ್ತ ಹೆಪ್ಪುಗಟ್ಟುವಿಕೆ.

(3ನೇ ಪುಟಕ್ಕೆ)

'ಮುಂಜಾವು' ವಾರ ಪತ್ರಿಕೆ ಮಾಲೀಕತ್ವದ ವಿವರ

ಫಾರಂ IV (ರೂಲ್ 8ರಂತೆ)

1. ಪ್ರಕಟಣೆಯ ಸ್ಥಳ : ಕೊಪ್ಪ
2. ಅವಧಿ : ವಾರಪತ್ರಿಕೆ

3, 4, 5 : ಸಂಪಾದಕ, ಮುದ್ರಕ ಮತ್ತು ಪ್ರಕಾಶಕರ ಹೆಸರು, ರಾಷ್ಟ್ರೀಯತೆ ಮತ್ತು ವಿಳಾಸ :
ಸಿರಿಮನೆ ನಾಗರಾಜ್,
ಭಾರತೀಯ ಪ್ರಜೆ,
129, ವೀರಭದ್ರ ಸ್ವಾಮಿ ರಸ್ತೆ, ಕೊಪ್ಪ

6. ಮಾಲೀಕತ್ವ ಹೊಂದಿರುವವರ ಹೆಸರು, ವಿಳಾಸ:
ಸಿರಿಮನೆ ನಾಗರಾಜ್,
ಪೂರ್ಣ ಮಾಲೀಕತ್ವ

ನಾನು, ಸಿರಿಮನೆ ನಾಗರಾಜ್, ಈ ಮೂಲಕ ಘೋಷಿಸುವುದೇನೆಂದರೆ, ಮೇಲ್ಕಂಡ ವಿವರಗಳು ನನ್ನ ತಿಳುವಳಿಕೆ ಮತ್ತು ನಂಬಿಕೆಯಂತೆ ನಿಜವಿರುತ್ತವೆ.

(ಸಹಿ) ಸಿರಿಮನೆ ನಾಗರಾಜ್
ಕೊಪ್ಪ ಪ್ರಕಾಶಕ

ಪದ್ಯದಂಕಣ

## ಯುಗಾದಿ

### 1

ನಿದ್ರೆ ಹೊಡೆಯುತ್ತಿರುವ
ನೊಣ ಹೊಡೆಯುತ್ತಿರುವ
ಆಕಳಿಸುತ್ತಿರುವ–ಹುಚ್ಚೆದ್ದು ಓಡುತ್ತಿರುವ
ನನ್ನೆಲ್ಲಾ
ಬಂಧು ಭಗಿನಿಯರೇ
ನಿಮಗಿದೋ, ಯುಗಾದಿಯ ಶುಭಾಶಯ!

..........................

ಹಾ – ನನ್ನ ಯುವಕರೆ
ಕನಸ ಕಾಣುವುದ ಬಿಟ್ಟು
ಹಿಡಿಯಿರಿ ಹಣದ ಜುಟ್ಟು
ಪೈಸೆ ಮುಂಬಡ್ತಿಯಲ್ಲಿ,
ಮೇಲಿನವ ಒದ್ದಾಗ
'ಕರಿಯ'ನ್ನ ಬೆದರಿಸಿದ್ದರಲ್ಲಿ
'ಬೈ–ಟೂ' ಕಾಫಿ ಗಿಟ್ಟಿಸಿದ ಜಾಣತನದಲ್ಲಿ
ಕಾಣಿರಯ್ಯ ಆನಂದವನ್ನು–ಜೀವನದ
ಅನುಭೂತಿಯನ್ನು
ತುಳಿದೋ, ತುಳಿಸಿಕೊಂಡೋ,
ತರ್ಕ–ವಿತರ್ಕಿಸುತ್ತ
ಗೊಣಗುತ್ತ – ಗೊಣಗುತ್ತ
ಸದುತ್ಸಾಹಕ್ಕೆ ತಣ್ಣೀರು ಎರಚುತ್ತ
ಸಾಗಲಿ ಜೀವನ-ಯುಗ ಯುಗಾದಿಗಳ
ಸುತ್ತ
ಜಪ್ಪ ಗಟ್ಟಲಿ ಹೂವುಗಳು ಮನದಲ್ಲಿ,
ಸಮಾಜಕ್ಕೆ ಎರಡು ಬೊಗಸೆ ಮಣ್ಣು!
ನೀನಾಯಿತು – ನಿನ್ನದಾಯಿತು
ಅಷ್ಟಲ್ಲ – ಮತ್ತೇನು?
ಮರೆತೆ–ನನ್ನ ಕವಿಯೇ,
ಮತ್ತು ನನ್ನಲ್ಲಿರುವ ಕವಿಯೆ,
ಎಸೆ ನಿನ್ನ ಕವನವನ್ನೆಲ್ಲಾ
ದೂರ–ಬಲು ದೂರ.
ನಿನಗೇಕೆ ಮನು ಕುಲದ ಮೊಮ್ಮಕ್ಕಳ
ಚಿಂತೆ?

ಅಣುಶಕ್ತಿ ಅಪಾರವಯ್ಯಾ
ಚಿಂತೆಯ ಬಿಡು ಅದರ ಕೈಗೆ
ನಮೋ ಎಂದುಸುರು.
ಹಲವರೊಳಗೊಂದಾಗಿ
ಹತ್ತರೊಳು ಹನ್ನೊಂದಾಗಿ
ಚೆಂದಾಗಿ ಬದುಕು-ಜಾಣ-ಶಮ್ಮಾ!

—'ಡಾ|| ಸಂಹಾರ್'

### 2

ಪುನಃ ಸಮೀಪಿಸುತ್ತಿದೆ ಚಾಂದ್ರಮಾನ
ಯುಗಾದಿ
ಮಾಡುವಂತಿಲ್ಲ ಯಾವ ವಸ್ತುವನ್ನೂ
ಖರೀದಿ
ಬೆಲೆಗಳು ಪ್ರತಿದಿನ ಏರುತ್ತಾ ಗಗನಕ್ಕೆ
ನೂಕುತ್ತಿವೆ ಬಡ, ಮಧ್ಯಮ
ವರ್ಗದವರನ್ನು ಪಾತಾಳಕ್ಕೆ

ಬೆಲೆ

ಬೆಲೆಯೇರಿಕೆಗೆ ಬಂದಿದೆ ಈಗ ರಾಕೆಟ್
ವೇಗ!
ಜನ ಹಿತಾಸಕ್ತಿ ಯಾರಿಗೂ ಬೇಡ ಈಗ.
ಮನುಷ್ಯ ಜೀವದ ಬೆಲೆ ಮಾತ್ರ ಕಡಿಮೆ.
ಈಗ ಲೋಕದಲ್ಲಿ
ಈ ಬಗ್ಗೆ ಚಿಂತಿಸುವವರೂ
ಬಹಳ ಕಡಿಮೆ ಇಲ್ಲಿ!

—ಕೀರ್ತಿಲತಾ ಎಸ್. ಆರ್.

# ಬಂಡಿಗಡಿ: ಹಾವಳಿಕೋರರ ಹಾವಳಿ?

ಬಂಡಿಗಡಿಯ ಸುತ್ತಮುತ್ತ ನಡೆಯುವ ಪ್ರಮುಖ ಸಭೆ–ಸಮಾರಂಭಗಳು, ಅಲ್ಲಿನ ಸಾರ್ವಜನಿಕ ಸಮಸ್ಯೆಗಳು, ಮುಂತಾದ ಸುದ್ದಿಗೆ ಅರ್ಹವಾದ ವಿಷಯಗಳನ್ನು ಅಲ್ಲಿನ ಯುವಕ ಬಿ. ಎನ್. ಭಾಸ್ಕರ್ ಆಗೀಗ ಪತ್ರಿಕೆಗಳಿಗೆ ಬರೆಯುತ್ತಿರುತ್ತಾರಷ್ಟೆ. ಈಚಿನ ಅವರ ಪತ್ರವೊಂದರ ಮುಖ್ಯಾಂಶವನ್ನು ಇಲ್ಲಿ ಕೊಡುತ್ತಿದ್ದೇನೆ.

"ಫೆ 28ರ ಸಂಚಿಕೆಯಲ್ಲಿ ಬೀಳ್ಕೊಡುಗೆ ಸಮಾರಂಭದ ನನ್ನ ವರದಿ ಪ್ರಕಟವಾಗಿದೆಯಷ್ಟೆ. ಅದರ ಅಡಿಯಲ್ಲೇ 'ಭಂಡಿಗಡಿಯಲ್ಲಿ ಕುಡುಕರ ಹಾವಳಿ' ಎಂಬ ಇನ್ನೊಂದು ಸುದ್ದಿಯೂ ಪ್ರಕಟವಾಗಿದೆ. ಅದನ್ನು ತಮಗೆ ಯಾರು ಕಳಿಸಿದರೋ ನನಗೆ ಗೊತ್ತಿಲ್ಲ. ಆದರೆ ಅದನ್ನು ನೋಡಿದ ಇಲ್ಲಿನ ಕೆಲವರು ಬೆಚ್ಚಿ ಬಿದ್ದು ಕುಪಿತರಾಗಿದ್ದಾರೆ. "ಅದನ್ನು ಯಾರು ಕೊಟ್ಟರು? ಯಾಕ್ ಕೊಟ್ರು? ಅವರನ್ನೂ ಪತ್ರಿಕೆಯವರನ್ನೂ ನೋಡಿಕೊಳ್ಳುತ್ತೇವೆ...." ಎಂದು ಅಲ್ಲಿ–ಇಲ್ಲಿ ಹೇಳುತ್ತ, ಕೆಲವರು ನನ್ನ ಹತ್ತಿರವೂ ಬಂದು, "ಮೇಲ್ಗಡೆಯ ಸುದ್ದಿಯನ್ನು ಕಳಿಸಿದಂತೆ ಇದನ್ನೂ ನೀವೇ ಯಾಕೆ ಕೊಟ್ಟಿರಬಾರದು? ಹಾಗೆ, ಹೀಗೆ...." ಎಂದು ಬೆದರಿಕೆ ಹಾಕುವ ಪ್ರವೃತ್ತಿ ಹೆಚ್ಚುತ್ತಿದೆ. ಕುಡಿದು ಹಾವಳಿ ಮಾಡುವವರಲ್ಲವಾದರೆ ಬೆಚ್ಚಿ ಬೀಳುವ ಅಥವಾ ಬೆದರಿಕೆ ಹಾಕುವ ಪ್ರಮೇಯ ಏನಿದೆ?"

ನಿಜ. ಕುಡಿಯುವವರೆಲ್ಲ ಹಾವಳಿಕೋರರಾಗಿರುವುದಿಲ್ಲ. ಆದರೆ ಈ ಹಾವಳಿಕೋರರು ಕುಡಿಯದಿದ್ದರೂ ಒಂದಿಲ್ಲೊಂದು ರೀತಿಯಲ್ಲಿ, ಒಬ್ಬರಿಗಲ್ಲ ಒಬ್ಬರಿಗೆ ಹಾವಳಿ ಕೊಡುವವರೇ.

ಇವರು ಬೇರೆಯವರನ್ನು (ವರದಿಗಾರ ಅಥವಾ ಪತ್ರಿಕೆಯವರನ್ನು) 'ನೋಡಿಕೊಳ್ಳುವ' ಮೊದಲು ತಮ್ಮನ್ನೇ ತಾವೊಮ್ಮೆ ನೋಡಿಕೊಂಡರೆ ಸಾಕಲ್ಲವೆ?

ಈ ಸುದ್ದಿಯನ್ನು ನಾನು ಭಂಡಿಗಡಿಗೆ ಭೇಟಿ ಕೊಟ್ಟಿದ್ದಾಗ ಈ ಹಾವಳಿಯಿಂದ ರೋಸಿಹೋಗಿದ್ದ ಸಾರ್ವಜನಿಕರೇ ಕೊಟ್ಟಿದ್ದು. ಆದರೆ, ಯಾವುದೇ ವಿಚಾರದಲ್ಲಿ ಯಾರು ಸುದ್ದಿ ಕೊಟ್ಟಿದ್ದೆಂಬುದು ಮುಖ್ಯವಲ್ಲ; ಸುದ್ದಿ ನಿಜ ಹೌದೋ, ಅಲ್ಲವೋ ಎಂಬುದಷ್ಟೇ ಮುಖ್ಯ. ಈಗಿನ ಸುದ್ದಿ ಸತ್ಯ ಎಂಬುದಕ್ಕೆ ಇವರುಗಳು ಬೆಚ್ಚಿಬಿದ್ದಿರುವುದೇ ಸಾಕ್ಷಿ.

ಸುದ್ದಿಯಲ್ಲಿ ಹಾವಳಿಕೋರರ ಹೆಸರು ಹಾಕಿಲ್ಲ. ಅದು ಯಾರೇ ಆಗಿರಲಿ, ತಿದ್ದಿಕೊಂಡರೆ ಸಾಕು ಎಂಬುದು ಉದ್ದೇಶ. ಹೇಳಿದವರು ಹಾಗೆ ತಿದ್ದಿಕೊಂಡಿರಲೂಬಹುದು. ತಮ್ಮನ್ನು ತಾವು ತಿದ್ದಿಕೊಳ್ಳಬಯಸದ ಹಾವಳಿಕೋರರು ಯಾರೆಂದು ಈಗ ಎಲ್ಲರಿಗೂ ತಿಳಿಯಬೇಕೆ? ಒಂದು ಸಣ್ಣ ಕೆಲಸ ಮಾಡಿ. ಹೀಗೆ ಬೆದರಿಕೆ ಹಾಕಲು ಬರುವವರ ಹೆಸರುಗಳನ್ನು ತಿಳಿಸಿಬಿಡಿ. ಅಷ್ಟೇ.

—ಸಿರಿಮನೆ ನಾಗರಾಜ್

ಓದುಗರ ಪತ್ರಗಳು

## "ಕೊಳವೆ ಬಾವಿ ತೆಗೆಸಿದ್ದು ಸಮರ್ಪಕವಾಗಿದೆ"

ಮಾನ್ಯರೆ,

28-2-1988ರ ತಮ್ಮ ಪತ್ರಿಕೆಯಲ್ಲಿ "ಕೊಳವೆ ಬಾವಿ ನುಂಗಿದ ಉಪ ಪ್ರಧಾನ" ಎಂಬ ಶೀರ್ಷಿಕೆಯಲ್ಲಿ ಬಂದಿರುವ ವರದಿಯ ಬಗ್ಗೆ ಈ ಕೆಳಕಂಡಂತೆ ಸ್ಪಷ್ಟನೆ ಕೊಡ ಬಯಸುತ್ತೇನೆ.

ಕೊಗಳ್ಳಿ, ಎಂಬಲ್ಲಿಗೆ ಮಂಜೂರಾಗಿದ್ದ ಕೊಳವೆ ಬಾವಿಯನ್ನು ನನ್ನ ಸ್ವಂತಕ್ಕಾಗಲೀ, ಸಂಬಂಧಿಕರಿಗಾಗಲೀ ಅಥವಾ ಯಾವುದೇ ಜಾತಿ-ಪಕ್ಷದವರಿಗೆ ಅನುಕೂಲವಾಗುವಂತೆ ನಿರ್ಮಿಸಿಲ್ಲ. ಈ ಬಾವಿಯಿಂದ 4-5 ಮನೆಗಳಿಗೆ ತುಂಬಾ ಹತ್ತಿರದಲ್ಲಿ ನೀರಿನ ಸೌಲಭ್ಯ ದೊರೆಯುತ್ತದೆ. ಇವರುಗಳು ಸಣ್ಣ ರೈತರು ಮತ್ತು ಕೂಲಿ ಕಾರ್ಮಿಕರಾಗಿರುತ್ತಾರೆ. ಈ ಬಾವಿ ಇರುವ ಜಾಗವು ಖಾಸಗಿಯವರದಾಗಿದ್ದು, ಅದನ್ನು ಸಾರ್ವಜನಿಕರಿಗೆ ಬಿಟ್ಟುಕೊಟ್ಟಿರುವುದಾಗಿ ಕರಾರು ಪತ್ರವನ್ನು ಬರೆಸಿಕೊಂಡಿರುತ್ತೇವೆ.

ನನ್ನ ಬಗ್ಗೆ ಆಪಾದನೆ ಮಾಡಿರುವವರು ಹೇಳಿದ ಜಾಗದಲ್ಲಿ ಬಾವಿ ಕೊರೆದರೆ ಕೇವಲ 3 ಮನೆಗಳಿಗೆ ಮಾತ್ರ ಅನುಕೂಲವಾಗುತ್ತದೆ. ಅದೂ ಅಲ್ಲದೆ ಈ ಮೂರು ಮನೆಗಳಿಗೂ ತುಂಬಾ ಹತ್ತಿರದಲ್ಲಿ ಒಂದು ಸರ್ಕಾರಿ ತೆರೆದ ಬಾವಿ ಇದೆ. ಅದರಲ್ಲಿ ಈಗಲೂ ಕೂಡ ಇವರುಗಳಿಗೆ ಕುಡಿಯಲು ಸಾಕಷ್ಟು ನೀರು ಇದೆ. ಈ ಎಲ್ಲಾ ಕಾರಣಗಳನ್ನು ಗಮನದಲ್ಲಿ ಇಟ್ಟುಕೊಂಡು ಮಂಡಲ ಪಂಚಾಯಿತಿಯ ಜವಾಬ್ದಾರಿ ಸ್ಥಾನದಲ್ಲಿರುವ ನಾನು ತೆಗೆದುಕೊಂಡ ತೀರ್ಮಾನವು ಸರಿಯಾಗಿರುವುದಲ್ಲದೆ, ಸಾರ್ವಜನಿಕರ ಅಭಿಪ್ರಾಯವೂ ಆಗಿರುತ್ತದೆ.

ಅದೂ ಅಲ್ಲದೆ ಮಂಡಲ ಪ್ರಧಾನರಾದ ಬಿ. ಎಸ್. ತಿಮ್ಮಯ್ಯನವರು ಸ್ಥಳವನ್ನು ಪರಿಶೀಲಿಸಿ ಒಪ್ಪಿಗೆ ಕೊಟ್ಟಿದ್ದಾರೆ. ಕಿಸಾನ್ ಸಭೆಯ ತಾಲ್ಲೂಕು ಅಧ್ಯಕ್ಷರಾದ ಕೊಗಳ್ಳಿ ನಾಗರಾಜರವರು ಕೂಡ ಸ್ಥಳದಲ್ಲಿ ಉಪಸ್ಥಿತರಿದ್ದು ಸಂಪೂರ್ಣ ಒಪ್ಪಿಗೆಯನ್ನು ಕೊಟ್ಟಿದ್ದಾರೆ. ಊರಿನ ಮುಖಂಡರಾದ ವಿಜಯಕುಮಾರ್, ಸೋಮೇಗೌಡ ಮತ್ತು ಊರಿನವರ ಒತ್ತಾಯದ ಮೇರೆಗೆ ಈ ಸ್ಥಳದಲ್ಲಿ ಕೊಳವೆ ಬಾವಿಯನ್ನು ಮಾಡಿಸಿರುತ್ತೇನೆ.

ಈ ಸಂಬಂಧದಲ್ಲಿ ನಾನು ಯಾವುದೇ ಭ್ರಷ್ಟಾಚಾರ ಅಥವಾ ಯಾವುದೇ ರೀತಿ ಪಕ್ಷಪಾತ ಮಾಡಿಲ್ಲ ಎಂದು ಈ ಮೂಲಕ ಸ್ಪಷ್ಟಪಡಿಸುತ್ತೇನೆ.

—ಎನ್. ಪಿ ಚೆರಿಯ
ಉಪ ಪ್ರಧಾನ,
ಬಾಳೆ ಮಂಡಲ ಪಂಚಾಯಿತಿ,
ನರಸಿಂಹರಾಜಪುರ ತಾಲ್ಲೂಕು.

## "ಹರಿಹರಪುರ ಎಸ್ಸೈಗೆ ವರ್ಗ ಬೇಡ"

ಮಾನ್ಯರೆ,

ಕಳೆದ 2-3 ವರ್ಷಗಳಿಂದ ಹರಿಹರಪುರದಲ್ಲಿ ಜನಾನುರಾಗಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಸಬ್‌ಇನ್‌ಸ್ಪೆಕ್ಟರ್ ದುಗ್ಗಪ್ಪ ಅವರನ್ನು ಬೇರೆಡೆಗೆ ವರ್ಗಾಯಿಸಿರುವುದಾಗಿ ಹರಿಹರಪುರದಲ್ಲಿ ವದಂತಿ ಹಬ್ಬಿದೆ.

ಒಬ್ಬ ನಿಷ್ಠಾವಂತ ಅಧಿಕಾರಿಯಾದ ದುಗ್ಗಪ್ಪನವರಿಂದ ಯಾರಿಗೂ ಕಿರುಕುಳ ಅಥವಾ ತೊಂದರೆ ಆಗುತ್ತಿಲ್ಲ. ಇವರೇ ಇನ್ನೂ ಕೆಲವು ವರ್ಷ ಇಲ್ಲಿ ಇದ್ದರೆ ಸುತ್ತಮುತ್ತಲ ಜನತೆಗೆ ನೆಮ್ಮದಿಯಿಂದ ಬಾಳಲು ಸಹಾಯವಾಗುತ್ತದೆ ಎಂದು ನಮ್ಮೆಲ್ಲರ ಅನಿಸಿಕೆ. ಇವರ ವರ್ಗಾವಣೆಯಲ್ಲಿ ಶ್ರೀಮಂತರ ಕೈವಾಡ ಇದೆಯೇನೋ ಎಂಬ ಶಂಕೆಯೂ ಮೂಡುತ್ತದೆ.

ಆದ್ದರಿಂದ ಇಷ್ಟು ಬೇಗನೆ ಇವರನ್ನು ವರ್ಗಾಯಿಸದೆ ಇನ್ನೂ ಕೆಲ ಕಾಲ ಇಲ್ಲೇ ಉಳಿಸಬೇಕೆಂದು ಕ್ಷೇತ್ರದ ರಾಜಕೀಯ ಮುಖಂಡರು ಮತ್ತು ಸಂಬಂಧಪಟ್ಟ ಮೇಲಧಿಕಾರಿಗಳಲ್ಲಿ ಮನವಿ ಮಾಡುತ್ತೇವೆ.

—ಹರಿಹರಪುರ ಮತ್ತು
ಸುತ್ತಮುತ್ತಲ ಗ್ರಾಮಸ್ಥರು
(13 ಜನರ ಸಹಿಗಳಿವೆ)

## ಅಭಿಮಾನಿ ಓದುಗರಿಗೆ ಕೃತಜ್ಞತೆಗಳೊಂದಿಗೆ.....

ಪ್ರಿಯ ಓದುಗರೆ,

ನನ್ನ ಲೇಖನಗಳು ಪತ್ರಿಕೆಯಲ್ಲಿ ಕಡಿಮೆಯಾಗಿರುವುದಕ್ಕೆ ಆತ್ಮೀಯ ಮುಂಜಾವು ಓದುಗರು ಪತ್ರಿಕೆಯ ಮೂಲಕ ಹಾಗೂ ನೇರವಾಗಿ ಕೂಡ ಪ್ರತಿಕ್ರಿಯಿಸಿ, ಪುನಃ ಬರೆಯುವಂತೆ ಅಪೇಕ್ಷೆ ವ್ಯಕ್ತ ಪಡಿಸಿರುವುದಕ್ಕೆ ಕೃತಜ್ಞತೆಗಳು.

ನನ್ನ ಕಣ್ಣಿನ ತೊಂದರೆಯಿಂದ ಬರೆಯುವುದನ್ನು ಸ್ವಲ್ಪ ನಿಲ್ಲಿಸಬೇಕಾಗಿರುವುದಕ್ಕೆ ವಿಷಾದಿಸುತ್ತೇನೆ.

ಇನ್ನು ಮುಂದೆ "ಎನ್ನಾಪುರದ ಸಂತೆ ಮಾತು" ಎಂಬ ಅಂಕಣದಲ್ಲಿ ಈ ತಾಲ್ಲೂಕಿನ ಅದಕ್ಷ, ಭ್ರಷ್ಟ, ಲಂಚಕೋರರಾದಂತಹ ಅಧಿಕಾರಿ, ನೌಕರ ಹಾಗೂ ರಾಜಕೀಯ ದೊಂಬರನ್ನು ನಿಮ್ಮ ಮುಂದೆ ಸ್ವಲ್ಪ ಉಸುರಿನ ಹೆಣಗಳಂತೆ ನಿಲ್ಲಿಸುವ ಪ್ರಯತ್ನ ಮಾಡುತ್ತಿದ್ದೇನೆ. ಇದರಲ್ಲಿ ಬರುವ ವಿಚಾರಗಳೆಲ್ಲಾ ಸಂಬಂಧಪಟ್ಟವರಿಗೆ ಅನ್ವಯಿಸಿದ್ದರೆ ತಿದ್ದಿ ನಡೆದುಕೊಳ್ಳಿ. ಅಲ್ಲವಾದರೆ ಹೇಗೂ 'ಸಂತೆ ಮಾತು'! ನೂರಕ್ಕೆ 90 ಭಾಗ ಬೆಂಕಿ ಇಲ್ಲದೇ ಹೊಗೆಯಾಡಿದ್ದನ್ನ ಈ ಅಂಕಣದಲ್ಲಿ ತಿಮ್ಮ-ಗೌಡರ ವಿಡಂಬನೆಯ ಮೂಲಕ ನಿಮ್ಮ ಕಿವಿ ತಲುಪಿಸಲು ಪ್ರಯತ್ನಿಸುತ್ತೇನೆ.

ಸಲಹೆ-ಸಹಕಾರಕ್ಕೆ ಸದಾ ಸ್ವಾಗತವಿದೆ,

ಇಂತು ತಮ್ಮವ,

—ಎಂ. ಐ. ಶ್ರೀನಿವಾಸಮೂರ್ತಿ
ಮೂಡುಬಾಗಿಲು

### ಬಹಿರಂಗರಕ್ತಸ್ರಾವಕ್ಕೆ ಚಿಕಿತ್ಸೆ

(2ನೇ ಪುಟದಿಂದ)

ಬಹಿರಂಗ ರಕ್ತಸ್ರಾವಕ್ಕೆ ಕಾರಣ ಏನೇ ಇರಲಿ, ಅದನ್ನು ನಿಲ್ಲಿಸಲು ಜನಸಾಮಾನ್ಯರು ನೆನಪಿನಲ್ಲಿ ಇಡಬೇಕಾದ ಕ್ರಮ ಒಂದೇ- ಗಾಯದ ಭಾಗದ ಮೇಲೆ ನೇರ ಒತ್ತಡ ಅಥವಾ ಗಾಯವನ್ನೇ ಭದ್ರವಾಗಿ ಒತ್ತಿ ಹಿಡಿಯುವುದು.

—ಡಾ|| ಬಿ. ಸುಭಾಷ್
ಬೆಂಗಳೂರು

(ಸೌಜನ್ಯ: ತೀರ್ಥಹಳ್ಳಿ ಗ್ರಾಮಭಾರತಿ)

### ಭೇಷ್, ಕೀಪ್ ಇಟ್ ಅಪ್!

ಕೊಪ್ಪ ಬಾಳಗಡಿಯ ಸರ್ವೋದಯ ಯುವಕ ಸಂಘದವರು ಫೆ. 26 ರಿಂದ 28ರ ವರೆಗೆ ಬೀರೂರಿನಲ್ಲಿ ನಡೆದ ರಾಜ್ಯ ಮಟ್ಟದ ಯುವಜನ ಮೇಳದಲ್ಲಿ ಅಭಿನಯಿಸಿದ 'ಹುತ್ತ' ನಾಟಕ ರಾಜ್ಯ ಮಟ್ಟದ ಎರಡನೇ ಪ್ರಶಸ್ತಿಯನ್ನೂ ಅದರ ನಿರ್ದೇಶಕ ಕೆ. ಎಸ್. ಪ್ರಕಾಶ ಮೊದಲ ಸ್ಥಾನವನ್ನೂ ಪಡೆದಿದ್ದಾರೆ.

ಅಂತೆಯೇ ಕಮ್ಮರಡಿಯ ಪ್ರಕೃತಿ ಯುವತಿ ಮಂಡಳಿಯವರ 'ಭೈರ' ನಾಟಕ 3ನೇ ಸ್ಥಾನವನ್ನು ಪಡೆದಿದೆ.

ಈ ಎಲ್ಲ ಯುವಜನರಿಗೆ 'ಭೇಷ್, ಕೀಪಿಟಪ್!' ಎನ್ನೋಣವೆ?

—ಸಂ.

ಎನ್ನಾಪುರದ ಸಂತೆ ಮಾತು...........!

## ಹಳ್ಳಿ ಸೊಸೈಟೀಲಿ 'ರಾಮ' 'ನಾರಾ'—ಯಣ ....

ಎನ್ನಾಪುರದ ಸಂತೆ ಕಡೆಯಿಂದ ಬರುತ್ತಿದ್ದ ತಿಮ್ಮನ್ನ ಕಂಡ ಗೌಡ್ರು ಕೇಳಿದ್ರು— "ಏನಲೇ ತಿಮ್ಮಾ.. ಇಷ್ಟು ಬೇಗ ಸಂತೆ ಮುಗ್ಸಿಬಿಟ್ಯಾ?...."

ಏನ್ ಸಂತೆ ಗೌಡ್ರೆ? ಮಾಲೂ ಮುಟ್ಟಂಗಿಲ್ಲ ಮೆಣ್ಸಿನ್ಕಾಯಿ ಏನಾಗೋಗೈತೆ—ಮುಟ್ಟಂಗೇ ಇಲ್ಲ.

ನೀನೂ ಹೋಗಿ ಹೋಗಿ ಆ ಖಾರಕ್ಕೆ ಕೈ ಹಾಕೀಯಲ್ಲ. ಖಾರ ಇನ್ನೂ ಖಾರ ಆಗ್ತೈತೆ ಕಣ್ಲೇ!

ಅದ್ಕೇ ಗೌಡ್ರೆ, ಹಳ್ಳಿ ಸೊಸೈಟಿಗಾರ ಹೋಗಿ (ವಿಎಸ್‌ಎಸ್‌ಎನ್) ಒಂದೆರಡು ಕೇಜಿ ಅಕ್ಕಿ ತಗೊಳ್ಳಾಕೆ ಹೊರಟೆ.

ಥೂ ನಿನ್ನ.... ಎರ್ಡು ಕೇಜಿ ಎಲ್ಲಲಾ ಕೊಡ್ತಾರೆ ಅವ್ರು? ಮೂಟೆ.... ಮೂಟೆ ಕೇಳು ಕೊಡ್ತಾರೆ.

ಸುದ್ದಿ ಕೇಳ್ದೆ ಗೌಡ್ರೆ. ಹತ್ಮೂಟೆ ಅಕ್ಕಿ ಹೊರಗೆ ಕಳ್ಸಿದ್ರು. ಜನ್ರೆಲ್ಲಾ ಸೇರಿ ಹಿಡಿದ್ರಂತೆ. ತಕ್ಷಣ ಓಡೋಡಿ ಬಂದ ಸೀಡೀಓ. ರಾಮಭಟ್ರು 'ಸ್ಟಾಕ್ ಕರೆಕ್ಟ್' ಅಂತ ಬರುದ್ರಂತೆ. ಹೌದಾ?

ನೀ ಹೇಳಿದ ಭಟ್ರು ಸಾಧಾರಣದೋರಲ್ಲ ....ಶ್ರೀ ರಾಮ ಭಟ್ರು = ಶ್ರೀ+ರಾಮ+ಭಟ್ರು.

ಅದೇನ್ ಬಿಡ್ಸಿ ಹೇಳಿ ಗೌಡ್ರೆ. ಹಿಂಗೇ ಅಂದ್ರೆ ಹ್ಯಾಂಗೆ ಅರ್ಥಮಾಡ್ಕೊಳ್ಳೋದು?

ಕೇಳು....ಶ್ರೀ=ಸ್ತ್ರೀ, ರಾಮ=ಕಾಂಗ್ರೆ ಭಟ್ರು=ಜನತಾ..... ತಿಳೀತಾ

ಇನ್ನೂ ಒಗಟು ಮಾಡಿದ್ರಿ, ಬಿಡ್ಸಿ ಹೇಳಿ

ಬಿಡ್ಸ್ಸ....ಬಿಡ್ಸ್ಸ....ಅಂದ್ರೆ ಇನ್ನ ಹುಚ್ಚು ಬಿಡ್ಸಬೇಕಷ್ಟೆ.... ರಾಮ ಅನ್ನೋದಕ್ಕೆ ಕಾಂಗ್ರೆಸ್ನೋರು, ಭಟ್ರು ಅನ್ನೋದಕ್ಕೆ ಜನತಾದೋರು ರಕ್ಷಣೆ ಮಾಡ್ತಾರಂತೆ. ಈ ಎರಡೂ ಕಡೆಯಲ್ಲಿ ಕೆಲವರಿಗೆ "ಶ್ರೀ"ಯಾಗಿ ಕಂಡ್ರೆ ಕೆಲವರಿಗೆ "ಸ್ತ್ರೀ"ಯಾಗಿ ಕಾಣ್ತಾರಂತೆ ಈ ಭಟ್ರು. ಹೀಗಾಗಿ ಈ ಎರಡೂ ಕಡೆಯವರಿಂದ ಉಳಿದಿತಾರಂತೆ. ಮಸಲತ್ ಅಂದ್ರೆ ಇದು ನೋಡಪ್ಪಾ

ಅಕ್ಕಿ ಕತೆ ಮುಂದೇನಾಯ್ತು ಗೌಡ್ರೆ?

ತಹಸೀಲ್ದಾರ್ರು, "ನಾವು ಗಂಡಸ್ರು, ನಂ ಕೈಲೇನಾಗಾಕ್ಕಿಲ್ಲ. ನೀವು ಹೆಂಗಸ್ರು ನೋಡ್ಕೊಳ್ರಪ್ಪಾ" ಅಂತ ಡಿ. ಸಿ. ಸಾಹೇಬ್ರಿಗೆ ಕಳ್ಸಿದ್ರಂತೆ. ....ಎಷ್ಟಾದ್ರೂ ಅನ್ನದಾತೆ ಅನ್ನಪೂರ್ಣೆ ಹೆಂಗ್ಸಲ್ವೆ?.... 'ಹಿಡ್ದ ಅಕ್ಕೀನೆಲ್ಲಾ ಬಡ ಜನರಿಗ ಕಂಟ್ರೋಲ್ ರೇಟಿಗೆ ಹಂಚಿ ದುಡ್ಡ ಸರ್ಕಾರಕ್ಕೆ ಜಮಾ ಮಾಡಿ' ಅಂತ ಆದೇಶ ನೀಡಿದ್ರಂತೆ.

ಹಾಗಾದ್ರೆ ಈ ಅಕ್ಕಿ ಯಾರ್ದೂ ಅಂತೀರಾ?

ಸೆಕ್ರೆಟ್ರಿ ನಾರಾಯಣ, 'ಇದು ನಮ್ ಸೊಸೈಟಿ ಅಕ್ಕಿ ಅಲ್ಲ... ಅಕ್ಕಿ ಸಿಕ್ಕಿದಂಗೆ ನಾವು ಸಿಕ್ಕಿಲ್ಲಾ. ಹಂಗ್ಮಾಡ್ಬಿಟ್ರೆ ಚಾಣಾಕ್ಷ ರಾಮ್‌ಭಟ್ರು.... ಜೈ ಶ್ರೀ ರಾಮ ಭಟ್ರು' ಅಂತಾನಂತೆ ದಿನಗೂಲಿ ನೌಕರ ಸಾದಿಕ್, 'ಬಾಮ್ಮಾತ್ನಲ್ಲಿ ಬಲವಂತವಾಗಿ ಇಟ್ರೋ.. ಅಂದ್ರು ಸೆಕ್ರೆಟ್ರಿಗಳು.. ಅಕ್ಕಿ ಮನೇಲಿ ಇಟ್ಕಂಡೆ' ಅಂತ ಬರ್ದುಕೊಟ್ನಂತೆ ತಹಸೀಲ್ದಾರ್ರಿಗೆ

ಒಳ್ಳೆ ಚೆಂದಾಗೈತೆ, ಮುಂದ್ಕೇಳಿ ಗೌಡ್ರೇ

ಲೇ.... ಪತ್ರಮುಖ ಮಾಡ್ಕೊಳ್ಳೋದ ಸುತ್ತದ ಕೃಷ್ಣಯ್ಯ. ಬೇಗ ಹೋಗಿ ಎಂ. ಐ. ಎಸ್. ಮೂರ್ತಿ ಕಾಲ್ನ್ಗೆ.... ನಾನು ಸೇಲ್ಸಮನ್ನು. ನನ್ ತಲೀಗೆ ತಂದಾರೆ. ನನ್ನ ಉಳ್ಸಬೇಕಾದ್ರೆ ಈ ವಿಚಾರದ ಕೈಬಿಡಿ ಅನ್ನು.... ಆದಕ್ಕೂ ಜುಪ್ ಅನ್ಲಿಲ್ಲಾ—ನಿಮ್ ಜಾತಿ ಮಗನ್ನ ಉಳ್ಸಿ ಅಂತ ಅಳು. ಹೀಗಂತ ಸೆಕ್ರೆಟ್ರಿ, ಸಿ. ಡಿ. ಓ. ಹೇಳಿಕಳ್ಸಿದ್ರಂತೆ ನೋಡು.

ಎಂ.ಐ.ಎಸ್. ಮೂರ್ತಿ ಕಾಲ್ದಿಕ್ಕೆ ಯಾಕೆ ಹೇಳಿಕಳ್ಸಿದ್ರು?

ಅಕ್ಕಿ ಹಿಡ್ದ ಮುಖಂಡ್ರನ್ನೆಲ್ಲಾ ದಿಕ್ಕು ದಿವಾಳಿ ಮಾಡೀಂವಿ. ಇವನೊಬ್ಬ ಪಟ್ಟು ಹಿಡಿದವ್ನೆ.... ಜಾತಿ ಹೇಳಿ ಸರಿ ಮಾಡ್ಕೊಳ್ಳೋದು ನಿಂಗ್ ಬಿಟ್ಟಿದ್ದು ಅಂದ್ರಂತೆ. ನೀತಿ ಅಂತ ಬಡ್ಕೊಳ್ಳೋ ಇನ್ನಿಗೆ ಜಾತಿ ಏನೂ ಮಾಡ್ಸಿಲ್ಲಂತೆ ನೋಡು.... 'ವಿಚಾರಣೆ ಆದಾಗ ಸತ್ಯ ಹೇಳು. ಬದ್ಕೊತೀಯ.... ಸುಳ್ಳು ಹೇಳಿದ್ರೆ ಜೈಲಿಗೋಗ್ತೀಯಾ.... ಹೋಗು' ಅಂದ್ರಂತೆ

ಅವನೊಬ್ಬ ಕನಿಕರ ಇಲ್ದವ್ನು....

ಥೂ ನಿನ್.... ಕನಿಕರ ಅಂತೆ.... ಕನಿಕರ.... ಮಕ್ಳು ಸಾಯ್ತಾ ಅವೆ ಅಂತ ಎರಡು ಕೆ. ಜಿ. ಅಕ್ಕಿ ಕೇಳೋರಿಗು ಈ ಸೊಸೈಟೀಲಿ... ಬಡೋರ ಮಕ್ಳು ಬದುಕ್ಬೇಕ್ತಲ್ವ ನೋಡು. ಅಮ್ಯಾಲೆ ಕನಿಕರದ ಮಾತಾಡು.... ಇವನ್ನ ಹೊಟ್ಟೆಗೆ ಹಿಟ್ಟಿಲ್ಲದ ಜನ ಅರ್ಜಿ ಮಾಡ್ಕೊ ಬೇಕು ಕಣಾ.

ಇಷ್ಟೆಲ್ಲಾ ನಡೆದ ಕಥೀನ ಯಾವ ಪ್ರತಿನಿಧಿಗಳ ಗಮನಕ್ಕೂ ತಿಳ್ದಿಲ್ವಾ ಗೌಡ್ರೆ?

ತಿಂದಿದೋವೆ— ಆಗಿದೋದು ಎತ್ತಾ ಮುಂದಿನವಾರ ಹೇಳ್ತೀನಿ ಮುಂದಿನ ವಾರೀಗೆ ಬಾ.... ಹೋಗು— ಎಂದು ಹೇಳಿ ಹೊರಟೇ ಬಿಟ್ರು ಗೌಡ್ರು

● 'ಮುಖಚಾಟ್ನು ಮುಖಭಾವ್'

## ಕರ್ನಾಟಕ ಬ್ಯಾಂಕಿನಲ್ಲಿ ಸಾಲ ವಿತರಣೆ

ಹೊಸಕೊಪ್ಪ : ಇಲ್ಲಿನ ಕರ್ನಾಟಕ ಬ್ಯಾಂಕ್‌ನಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅನ್ವಯ, ವಿವಿಧ ಉದ್ದೇಶಗಳಿಗಾಗಿ 14 ಮಂದಿ ಫಲಾನುಭವಿಗಳಿಗೆ ಒಟ್ಟ 48,000 ರೂ. ಸಾಲವನ್ನು ಮಾ. 3ರಂದು ಹಂಚಲಾಯಿತು.

1987-88ನೇ ಸಾಲಿನಲ್ಲಿ ಬ್ಯಾಂಕು ಒಟ್ಟು 26 ಜನರಿಗೆ 88 ಸಾವಿರ ರೂ ಗಳ ಸಾಲವನ್ನು ಹಂಚಿದೆ. ಇದೇ ವರ್ಷ ಸಗಣಿ ಅನಿಲ ಘಟಕಗಳಿಗಾಗಿ 6 ಜನ ಫಲಾನುಭವಿಗಳಿಗೆ ಒಟ್ಟು 61,380 ರೂ. ಸಾಲ ಕೊಡಲಾಗಿದೆ ಎಂದು ಶಾಖಾ ಮೇನೇಜರ್ ಎನ್. ರಾಘವಾಚಾರ್ ತಿಳಿಸಿದ್ದಾರೆ.

# ಕೊಪ್ಪ ತಾ||ನಲ್ಲಿ ಸೀಮೆಎಣ್ಣೆ ಕೊರತೆ, ಕುಚ್ಚಲಕ್ಕಿ ಪೂರೈಕೆ ಬಗ್ಗೆ ಅಸಮಾಧಾನ

ಕೊಪ್ಪ: ಇಲ್ಲಿ ಮತ್ತು ಸುತ್ತಮುತ್ತಲ ಹಳ್ಳಿಗಳಲ್ಲಿ ಸೀಮೆ ಎಣ್ಣೆ ಕೊರತೆ ತಲೆದೋರಿದೆ ಎಂದು ಕಾರ್ಡುದಾರರು ದೂರುತ್ತಿದ್ದಾರೆ

ಲೆಕ್ಕಕ್ಕೆ ಈಗಲೂ ಹಿಂದಿನಷ್ಟೇ ಸೀಮೆ ಎಣ್ಣೆ ತಾಲ್ಲೂಕಿಗೆ ಬರುತ್ತಿದೆಯೆಂದು ಹೇಳಲಾಗಿದೆ. ಆದರೆ ಹಿಂದೆ ತಿಂಗಳಿಗೆ ಮೂರು ಬಾರಿ ಬರುತ್ತಿದ್ದು, ಪ್ರತಿ ಸಲವೂ ಸಾಮಾನ್ಯವಾಗಿ ಐದು ಲೀಟರಿಗೆ ಕಮ್ಮಿಯಿಲ್ಲದಂತೆ ಸಿಗುತ್ತಿತ್ತು. ಆದರೆ ಈಗ ಬರುವುದೂ ತಿಂಗಳಿಗೆ ಸಾಮಾನ್ಯವಾಗಿ ಎರಡೇ ಸಲ ಆಗಿರುವುದಲ್ಲದೆ, ಸುತ್ತಮುತ್ತಲ ಹಳ್ಳಿ ಪ್ರದೇಶಗಳವರು, ಎಸ್ಟೇಟಿನವರೂ ಸೇರಿದಂತೆ ಹೆಚ್ಚು ಕಡಿಮೆ ಎಲ್ಲಾ ಕಾರ್ಡುದಾರರೂ (ಸೌದೆಯ ಅಭಾವದ ಕಾರಣ) ಸೀಮೆಎಣ್ಣೆ ಒಯ್ಯುತ್ತಿದ್ದು, ಈ ಹೆಚ್ಚುವರಿ ಬಳಕೆಯನ್ನು ಪರಿಹರಿಸುವಷ್ಟು ಹೆಚ್ಚಳ ಸರಬರಾಜಿನಲ್ಲಿ ಆಗಿಲ್ಲ. ಕೆಲವು ಸೊಸೈಟಿಗಳಲ್ಲಿ ಕಾರ್ಡುಗಳ ಸಂಖ್ಯೆಗೆ ಅನುಗುಣವಾಗಿ ಸೀಮೆಎಣ್ಣೆ ಕೋಟಾ ಸಿಗುತ್ತಿಲ್ಲ ಎನ್ನಲಾಗಿದೆ.

### ಕುಚ್ಚಿಗೆ ಅಕ್ಕಿ

ಇದೇ ರೀತಿ ಅಕ್ಕಿಯ ಪೂರೈಕೆ ಕೂಡ ವ್ಯಾಪಕವಾಗಿ ಅಸಮಾಧಾನಕ್ಕೆ ಕಾರಣವಾಗಿದೆ. ನೆರೆಯ ತಾಲ್ಲೂಕುಗಳಲ್ಲೆಲ್ಲ ಬೆಳ್ತಿಗೆ ಅಕ್ಕಿ ಸರಬರಾಜಾಗುತ್ತಿದ್ದರೆ ಕೊಪ್ಪ ತಾ||ನಲ್ಲಿ ಮಾತ್ರ ಆರೇಳು ತಿಂಗಳಿಂದಲೂ ಕುಚ್ಚಿಗೆ ಅಕ್ಕಿಯೇ ಬರುತ್ತಿದೆ. ಇದರ ಅಭ್ಯಾಸವಿಲ್ಲದ ಎಷ್ಟೋ ಬಡ, ಮಧ್ಯಮ ವರ್ಗದವರು ತೀವ್ರ ಇಕ್ಕಟ್ಟಿಗೆ ಸಿಕ್ಕಿದ್ದಾರೆ.

### ಜಿಲ್ಲಾ ಪರಿಷತ್ತು ಗಮನಿಸಲಿ

ಈಗ ಜಿಲ್ಲಾ ಪರಿಷತ್ತಿನ ತಾ|| ಕಾರ್ಯನಿರ್ವಾಹಕ ಪ್ರತಿನಿಧಿಯಾಗಿ ಪಡಿತರ ವಿತರಣೆ ವ್ಯವಸ್ಥೆಯ ಹೊಣೆ ಹೊರಿಸಲ್ಪಟ್ಟಿರುವ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು, ಜಿಲ್ಲಾ ಮಟ್ಟದಿಂದ ದೊರೆಯುವ ತಾ|| ಕೋಟಾವನ್ನು ಹಿಂದಿನಂತೆಯೇ ವಿಂಗಡಣೆ ಮಾಡಿ ಆಯಾ ಮಂಡಲ ಪಂಚಾಯ್ತಿಗಳಿಗೆ ನೀಡುತ್ತಿರುವುದಾಗಿ ಹೇಳುತ್ತಾರೆ.

ಅಂತೂ ಈ ಕೊರತೆ ಮತ್ತು ಅಸಮಾಧಾನವನ್ನು ಜಿಲ್ಲಾ ಪರಿಷತ್ತಿನವರೇ ನೀಗಿಸಬೇಕಾಗಿದೆ.

## ಬೀಳ್ಕೊಡುಗೆ

ಕುದುರೆಗುಂಡಿ : ಅಂಚೆ ಇಲಾಖೆಯ ಮೈಲ್ ಓವರ್‌ಸಿಯರ್ ಆಗಿದ್ದು ಈಗ ಸ್ವಯಂ ನಿವೃತ್ತಿ ಪಡೆದಿರುವ ಐ. ಎಸ್. ಮಂಜುನಾಥ ಜೋಯ್ಸರನ್ನು ಇಲ್ಲಿನ ಅಂಚೆ ಇಲಾಖೆ ಸಿಬ್ಬಂದಿಗಳು ಮಾ 4ರಂದು ಹಾರ್ದಿಕವಾಗಿ ಬೀಳ್ಕೊಟ್ಟರು.

(ವರದಿ : ಜೆ. ಎಸ್. ಪ್ರಕಾಶ್.)

---

**ಚಂದಾ ಹಣ ಕಳಿಸಿ ಸಹಕರಿಸಿ**
**ವಾರ್ಷಿಕ ಚಂದಾ 25 ರೂ.**

---

# 4ನೇ ರಾಜ್ಯ ಮಟ್ಟದ ಕೆಸರು ಗದ್ದೆ ಓಟ

ಚಿಕ್ಕಮಗಳೂರಿನ ನೆಹರು ಯುವ ಕೇಂದ್ರವು ಕೊಪ್ಪ ತಾಲ್ಲೂಕು ಹಿರೇಗದ್ದೆಯ ಯುವಕ ಸಂಘದ ಸಹಯೋಗದೊಡನೆ 20-3-1988ನೇ ಭಾನುವಾರ ಹಿರೇಗದ್ದೆ ಗ್ರಾಮದಲ್ಲಿ **ರಾಜ್ಯಮಟ್ಟದ ಕೆಸರು ಗದ್ದೆ** ಓಟದ ಸ್ಪರ್ಧೆಯನ್ನು ಏರ್ಪಡಿಸಿದೆ.

ಈ ಸ್ಪರ್ಧೆಯಲ್ಲಿ ಭಾಗವಹಿಸಲಿಚ್ಛಿಸುವ ಯುವಕ ಯುವತಿಯರು ತಮ್ಮ ಪ್ರವೇಶ ಪತ್ರಗಳನ್ನು ತಾ|| 18.3.88 ರಂದು ಸಂಜೆ 5.00 ಗಂಟೆಯೊಳಗಾಗಿ ನೆಹರು ಯುವ ಕೇಂದ್ರ, ಚಿಕ್ಕಮಗಳೂರು ಅಥವಾ ಅಧ್ಯಕ್ಷರು, ಯುವಕ ಸಂಘ, ಹಿರೇಗದ್ದೆ ಇವರಿಗೆ ಕಳುಹಿಸಿ, ದಿನಾಂಕ 20.3.88 ಬೆಳಗ್ಗೆ 10-30ರ ಒಳಗೆ ಹಿರೇಗದ್ದೆ ಗ್ರಾಮಕ್ಕೆ ಬರತಕ್ಕದ್ದು (ಹಿರೇಗದ್ದೆಯು ಬಾಳೆಹೊನ್ನೂರಿನಿಂದ 9 ಕಿಲೋ ಮೀಟರ್ ದೂರದಲ್ಲಿ ಇರುತ್ತದೆ. ಕೊಪ್ಪ ಜಯಪುರ ರಸ್ತೆಯಿಂದಲೂ ಹೋಗಬಹುದು.)

ಸ್ಪರ್ಧೆಗಳಿಗೆ ಪ್ರವೇಶ ಶುಲ್ಕ ಇಲ್ಲ. ಸ್ಪರ್ಧೆಗೆ ಬಂದು ಹೋಗಲು ತಗಲುವ ವೆಚ್ಚವನ್ನು ಸ್ಪರ್ಧಿಗಳೇ ಭರಿಸತಕ್ಕದ್ದು. ಸ್ಪರ್ಧಿಗಳಿಗೆ ಹಿರೇಗದ್ದೆ ಗ್ರಾಮದಲ್ಲಿ ಉಚಿತ ಊಟ-ವಸತಿಯ ಸೌಕರ್ಯ ಏರ್ಪಡಿಸಲಾಗುವುದು.

ಹೆಚ್ಚಿನ ವಿವರಗಳನ್ನು ಚಿಕ್ಕಮಗಳೂರು ನೆಹರು ಯುವ ಕೇಂದ್ರದಿಂದ ಅಥವಾ ಯುವಕ ಸಂಘದ ಅಧ್ಯಕ್ಷರಿಂದ ಪಡೆಯಬಹುದು.

## ನಿಧನ

ಹಾಲ್ಮುತ್ತೂರು : ಇಲ್ಲಿನ ಸರ್ಕಾರಿ ಶಾಲೆಯಲ್ಲಿ ಹಿಂದೆ ಅಧ್ಯಾಪಕರಾಗಿದ್ದು, ಶಾಲೆ, ಸಹಕಾರ ಸಂಘ, ಅಂಚೆ ಕಛೇರಿ ಮುಂತಾದುವುಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದ ಸುಬ್ರಮಣ್ಯಂ ಫೆ 20ರಂದು ಹುಳಿಯಾರಿನಲ್ಲಿ ನಿಧನರಾದರು. ಫೆ. 25ರಂದು ದಿವಂಗತರ ಸ್ಮರಣಾರ್ಥ ಇಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ ಎರಡು ನಿಮಿಷ ಮೌನ ಆಚರಿಸಲಾಯಿತು. ಅನೇಕ ಗ್ರಾಮಸ್ಥರು ಮಾತನಾಡಿ ದಿವಂಗತರ ಗುಣಗಾನ ಮಾಡಿದರು. (ವರದಿ : ಎಚ್‌ವಿ. ನಾಗರಾಜ್)

## ಬಾಳೆಹೊಳೆ - ತೋಟದೂರು 'ರಸ್ತೆ'ಗೆ ಒತ್ತಾಯಿಸಿ

# ಗ್ರಾಮಸ್ಥರ ರಸ್ತೆ ತಡೆ ಚಳುವಳಿ

ಬಸರಿಕಟ್ಟೆ : ಟಾರು ಕಾಣದೆ, ರಿಪೇರಿಯಿಲ್ಲದೆ, ಜಲ್ಲಿ ಕಲ್ಲುಗಳೆಲ್ಲ ಎದ್ದು, ಹೊಂಡ ಮತ್ತು ಧೂಳುಮಯವಾಗಿರುವ, ಇಲ್ಲಿಗೆ ಸಮೀಪದ ತೋಟದೂರು-ಬಾಳೆಹೊಳೆ ನಡುವಿನ ಸರ್ಕಾರಿ ರಸ್ತೆಯ ತುರ್ತು ದುರಸ್ತಿಗಾಗಿ ಒತ್ತಾಯಿಸಿ ಮಾ. 20ರಂದು ಗ್ರಾಮಸ್ಥರು 1 ದಿನದ ರಸ್ತೆ ತಡೆ ಚಳುವಳಿ ನಡೆಸಲಿದ್ದಾರೆ.

ಶೃಂಗೇರಿ, ಹೊರನಾಡುಗಳಂಥ ಪ್ರಮುಖ ಪ್ರವಾಸಿ ಕ್ಷೇತ್ರಗಳನ್ನು ಸಂಪರ್ಕಿಸುವ ಏಕೈಕ ರಸ್ತೆ ಇದಾಗಿದ್ದು, ಬಸರಿಕಟ್ಟೆ ಕಳಸ ರಸ್ತೆಯ ಭಾಗವಾಗಿದೆ: ದಿನಕ್ಕೆ 50-60 ವಾಹನಗಳಲ್ಲದೆ ಸಾವಿರಾರು ಜನರು ಸಂಚರಿಸುವ ಈ 3 ಕಿ. ಮೀ. ರಸ್ತೆಗೆ ಟಾರು ಹಾಕಿಸಲು ಜನತೆ ಸರ್ಕಾರಕ್ಕೆ ಮಾಡುತ್ತ ಬಂದಿರುವ ಮನವಿಗಳು ಫಲ ನೀಡಿಲ್ಲ.

ಈಗ ಚಳುವಳಿಗೆ ಇಳಿಯಲಿರುವ ಈ ಪ್ರದೇಶದ ಸುತ್ತ ಮುತ್ತಲ ಗ್ರಾಮಸ್ಥರಿಗೆ ಬಿಳಾಲುಕೊಪ್ಪದ ಮಾರುತಿ ಜೇಸೀಸ್ ಹಾಗೂ ತೋಟದೂರಿನ ಯುವಕ-ಯುವತಿ ಮಂಡಳಿಗಳು ಜಂಟಿಯಾಗಿ ನೇತೃತ್ವ ವಹಿಸಲಿವೆ. ರಸ್ತೆ ತಡೆ ತೋಟದೂರಿನಲ್ಲಿ ಬೆಳಿಗ್ಗೆ 9 ರಿಂದ ಸಂಜೆ 5ರ ವರೆಗೆ ನಡೆಯುತ್ತದೆ.

## ರಾಜ್ಯ ಮಟ್ಟದ ರಸ್ತೆ ಓಟ ಸ್ಪರ್ಧೆ

ಕೊಪ್ಪ : ಇಲ್ಲಿನ ಮಾರುತಿ ಸ್ಪೋರ್ಟ್ಸ್ ಕ್ಲಬ್ ಮಾ. 21ರಂದು ರಾಜ್ಯ ಮಟ್ಟದ ರಸ್ತೆ ಓಟದ ಸ್ಪರ್ಧೆಯೊಂದನ್ನು ಏರ್ಪಡಿಸಿದೆ. ಸ್ಪರ್ಧಿಗಳು 20.3.88 ರೊಳಗಾಗಿ ಕಾರ್ಯದರ್ಶಿ, ಮಾರುತಿ ಸ್ಪೋರ್ಟ್ಸ್ ಕ್ಲಬ್, ಆಂಜನೇಯ ದೇವಸ್ಥಾನ, ಕೊಪ್ಪ, ಇಲ್ಲಿ ನೋಂದಾಯಿಸಬೇಕು.

## 'ಮಾಟ ಮಂತ್ರದ ಮಾಯಣ್ಣರು' ವರದಿ :

# ಒಂದು ನಿರಾಕರಣೆ ಮತ್ತು ಸ್ಪಷ್ಟನೆ

(ವರದಿ : ಕೃಷ್ಣ ಭಂಡಾರಿ)

ಜಯಪುರ : ಇಲ್ಲಿ ಇತ್ತೀಚೆಗೆ ಮನೆಯೊಂದರ ವಿವಾದದಲ್ಲಿ 'ಮಾಟ'ದ ಕೃತ್ಯ ಎಸಗಿದರೆಂಬ ನಮ್ಮ 28.2.88ರ ಸಂಚಿಕೆಯ ವರದಿಯಲ್ಲಿ ಇಲ್ಲಿನ ಗಾಯತ್ರಿ ಇಂಜಿನಿಯರಿಂಗ್ ವರ್ಕ್ಸ್‌ನ ಆರ್. ನಾಗರಾಜ್ ಎಂಬವರ ಹೆಸರೂ ಉಲ್ಲೇಖವಾಗಿತ್ತು. ಈ ಬಗ್ಗೆ ಈ ಕೆಳಗಿನಂತೆ ಅವರೊಂದು ನಿರಾಕರಣೆ ಹೇಳಿಕೆ ನೀಡಿದ್ದಾರೆ.

"ವಾಸ್ತವವಾಗಿ ಈ ಘಟನೆಗೂ ನನಗೂ ಸಂಬಂಧವಿಲ್ಲ. ಆ ದಿನ ನನ್ನ ಕೆಲಸದ ವಿಚಾರದಲ್ಲಿ ಗೋಪಾಲಾಚಾರಿಯವರ ಮನೆಯ ಬಳಿ ರಸ್ತೆಯಲ್ಲಿ ನಾನು ಹೋಗುತ್ತಿದ್ದಾಗ ಅಲ್ಲಿ ಇದ್ದ ನಮ್ಮ ತಂದೆ ನನ್ನನ್ನೂ ಕರೆದರು ಅಲ್ಲಿ ಅವರಿಗೂ ಗೋಪಾಲಾಚಾರಿಗೂ ಮಾತುಕತೆ ನಡೆಯಿತು. ಮನಸ್ಸಿಗೆ ಬೇಸರವಾಗುವಂಥ ಮಾತುಗಳನ್ನು ಕೇಳಿದ ನಮ್ಮ ತಂದೆಯವರು ಕೈಯಲ್ಲಿದ್ದ ಕಾಯನ್ನು ಅಲ್ಲೇ ಎಸೆದರು.

ಆದರೆ ಈ ಯಾವುದೇ ವಿಚಾರದಲ್ಲೂ ನನ್ನ ಪಾಲಿಲ್ಲ. ತಂದೆಯವರು ಕರೆದುದರಿಂದ ಮಾತ್ರ ನಾನು ಹೋದದ್ದು."

ಆದರೆ ಈ ಘಟನೆ ಆಕಸ್ಮಿಕವಲ್ಲ, ಕಾಯನ್ನು ಎಸೆದದ್ದು ಅಲ್ಲ ಎಂಬುದಕ್ಕೆ ಪೋಲೀಸರ ಮಹಜರೇ ಸಾಕ್ಷಿ ಇದೆ, ಅಪರಾಧಿಗಳ ತಪ್ಪೊಪ್ಪಿಗೆಯೂ ಇದೆ, ಜೊತೆಗೆ ಗೋಪಾಲಾಚಾರಿಯವರು ಈ ವಿವಾದದ ಬಗ್ಗೆ ಹೀಗೆನ್ನುತ್ತಾರೆ.

"ಈ ಯಾವ ಘಟನೆಯೂ ಆಕಸ್ಮಿಕವಲ್ಲ, ಪೂರ್ವಯೋಜಿತವೇ. ಹರಿಹರಪುರದಿಂದ ಬಂದವರು ಎಸಗಿದ ಕೃತ್ಯ ವರದಿಯಲ್ಲಿರುವಂತೆಯೇ ಪೂರ್ಣ ಸತ್ಯ. ಇಡೀ ಘಟನೆಗೆ ನಾಗರಾಜನೂ ಸಕ್ರಿಯ ಬೆಂಬಲಿಗನು. 18 ವರ್ಷದಿಂದ ಈ ಹುಲ್ಲಿನ ಮನೆಯನ್ನು ನಾನೇ ಕಟ್ಟಿ, ರಿಪೇರಿ ಮಾಡಿ, ನೇರಿಸುತ್ತಾ ಬಂದಿದ್ದೇನೆ. ಆದ್ದರಿಂದ ಇದು ನನ್ನದೇ."

# 'ತಲೆಗೆಲ್ಲ ಒಂದೆಮಂತ್ರ'ಕ್ಕೆ ಯಶಸ್ವಿ ವಿರೋಧ

ಬೆಳವಿನಕೊಡಿಗೆ: ಈ ಗ್ರಾಮದ ಕೆರೆಯೊಂದಕ್ಕೆ 'ರಿಪೇರಿ'ಯ ಹೆಸರಲ್ಲಿ ಹೂಳೆತ್ತದೆಯೇ ಏರಿಯನ್ನು ಮಾತ್ರ ಸ್ವಲ್ಪ ಎತ್ತರಿಸುವ ಸಣ್ಣ ನೀರಾವರಿ ಇಲಾಖೆಯ ಯತ್ನವನ್ನು ಸ್ಥಳೀಯ ಮಂಡಲ ಸದಸ್ಯ ಬಿ. ಕೆ. ರಮೇಶ್ ವಿರೋಧಿಸಿ, ಕೆರೆಯ ಹೂಳೆತ್ತಿಸುವುದರಲ್ಲಿ ಯಶಸ್ವಿಯಾಗಿದ್ದಾರೆ.

ಈ ರಿಪೇರಿ ಯಾವ ಯೋಜನೆಯ ಯಾವ ಕಾಮಗಾರಿ ಎಂಬ ಬಗ್ಗೆ ಮಂ. ಪಂಚಾಯ್ತಿಗೆ ಮಾಹಿತಿಯೇನೂ ಇರಲಿಲ್ಲ. ಕೆಲಸಗಾರರು ಮತ್ತು ಅಧಿಕಾರಿಗಳು ಕೆಲಸ ಆರಂಭಿಸಿದ್ದನ್ನು ಕಂಡ ರಮೇಶ್ ವಿಚಾರಿಸಿದಾಗ ಬೇರೆ ಕಡೆಗಳಂತೆ ಇಲ್ಲೂ ಏರಿ ಮಾತ್ರ ಎತ್ತರಿಸುವ ವಿಷಯ ತಿಳಿಯಿತು, 'ಹಾಗಿದ್ದರೆ ನಿಮ್ಮ ರಿಪೇರಿಯನ್ನು ನಿಲ್ಲಿಸಿದರೂ ಚಿಂತೆಯಿಲ್ಲ. ಬೇಕಿದ್ದರೆ ಮೇಲಧಿಕಾರಿಗಳಿಗೆ ಹಾಗೇ ಬರೆಯಿರಿ. ರಿಪೇರಿಯಾಗುವುದಿದ್ದರೆ ಹೂಳೆತ್ತಲೇ ಬೇಕು' ಎಂದು ರಮೇಶ್ ಪಟ್ಟು ಹಿಡಿದಾಗ, ಮೇಲಧಿಕಾರಿಗಳಿಗೆ ಬರೆದು ಆನಂತರ ಹೂಳೆತ್ತಿಯೇ ರಿಪೇರಿ ನಡೆಯಿತು.

ಈ ವಿಚಾರ 'ಮುಂಜಾವು'ಗೆ ತಿಳಿಸಿದ ರಮೇಶ್, ಜಿಲ್ಲಾ ಪರಿಷತ್ತು ಮತ್ತು ವಿವಿಧ ಇಲಾಖೆಗಳವರು 'ತಲೆಗೆಲ್ಲಾ ಒಂದೇ ಮಂತ್ರ' ಎಂಬಂತೆ ಮಾಡದೆ ಮಲೆನಾಡಿನ ಕಾಮಗಾರಿಗಳ ವಿಷಯದಲ್ಲಿ ಅಲ್ಲಲ್ಲಿನ ಪರಿಸ್ಥಿತಿಗನುಸಾರ ಕೆಲಸ ನಿರ್ವಹಿಸಬೇಕು; ಮತ್ತು ಯಾವುದೇ ಕಾಮಗಾರಿಗಳ ವಿವರಗಳನ್ನು ಆಯಾ ಮಂಡಲ ಪಂಚಾಯ್ತಿಯ ಮೂಲಕ ಸ್ಥಳೀಯ ಮಂಡಲ ಸದಸ್ಯರ ಗಮನಕ್ಕೆ ತರಬೇಕು ಎಂದು ಆಗ್ರಹಿಸಿದ್ದಾರೆ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಶಿರಿಮನೆ ನಾಗರಾಜ್, ಮುದ್ರಣ : ದೀಪಟಿಗೆ ಅಚ್ಚುಕೂಟ, ಕೊಪ್ಪ